ಸೃಜನಿ

**SRUJANI: Indian Journal of Innovative Research and Development (SIJIRD)**
Volume-3 Issue 1, March-April 2024, Pp. 38-42
Bi-Monthly, Peer-Reviewed, Open Access, Indexed Journal

I S S N: 2583-3510
SIRDF JOURNALS
editor@srujani.in
www.srujani.in

# ದೂರದರ್ಶನ ಮಾಧ್ಯಮದಲ್ಲಿ ಮಹಿಳೆಯರ ಸ್ಥಾನಮಾನ

**ಮೀನಾಕುಮಾರಿ. ಎಂ**
ಕನ್ನಡ ಸಹಾಯಕ ಪ್ರಾಧ್ಯಾಪಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ. ಆರ್. ಪುರಂ, ಬೆಂಗಳೂರು.

***Abstract:***
*ದೂರದರ್ಶನ ಮಾಧ್ಯಮದಲ್ಲಿ ಮಹಿಳೆಯ ಸ್ಥಾನಮಾನಗಳ ಕುರಿತು ಅನೇಕ ಚರ್ಚೆಗಳು ನಡೆಯುತ್ತಿವೆ. ಇತ್ತೀಚಿನ ದಿನಗಳಲ್ಲಿ ಮಾಧ್ಯಮಗಳು ಜನ ಸಾಮಾನ್ಯರ ಮೇಲೆ ಅತಿ ಹೆಚ್ಚು ಪ್ರಭಾವವನ್ನು ಬೀರುತ್ತಿವೆ. ಸುದ್ದಿಯಾಗಲಿ, ಮನರಂಜನೆಯಾಗಲಿ ಇನ್ನೂ ಮತ್ತಿತರ ವಿಷಯಗಳಾಗಲಿ ದಿನದಿಂದ ದಿನಕ್ಕೆ ಭಿನ್ನತೆಯನ್ನು ಪಡೆದುಕೊಳ್ಳುತ್ತಿವೆ. ಈ ಬೆಳವಣಿಗೆಯಲ್ಲಿ ಮಹಿಳೆಯರ ಪಾತ್ರಗಳೂ ಸಹ ಬದಲಾಗುತ್ತಿವೆ. ಮಾಧ್ಯಮಗಳು ಮಹಿಳೆಯನ್ನು ಹೆಚ್ಚು ಹೆಚ್ಚು ಕಡೆ ಪ್ರಬಲೆಯಾಗಿ, ಧೈರ್ಯದ ಮೂರ್ತಿಯಾಗಿ, ಸದೃಡೆಯಾಗಿ ತೋರಿಸುವ ಪ್ರಯತ್ನಗಳು ನಡೆಯುತ್ತಿವೆ. ಹಾಗೆಯೇ ಅದಕ್ಕೆ ವೈರುಧ್ಯವೆಂಬಂತೆ ಖಳನಾಯಕಿಯಾಗಿ, ಧೂರ್ತೆಯಾಗಿ, ಅಬಲೆಯಾಗಿ ಬಿಂಬಿಸುತ್ತಲೂ ಇವೆ. ಉದ್ಯೋಗಸ್ಥ, ವಿಚಾರವಂತ ಮಹಿಳೆಯರನ್ನು ಗಮನದಲ್ಲಿರಿಸಿಕೊಂಡು ಮಾಧ್ಯಮಗಳು ತಮ್ಮ ಕಾರ್ಯಕ್ರಮಗಳನ್ನು ರೂಪಿಸುವುದು ತೀರಾ ಕಡಿಮೆ. ಹಾಗೆಂದ ಮಾತ್ರಕ್ಕೆ ಮಾಧ್ಯಮದಿಂದ ಮಹಿಳೆಗೆ ಏನೂ ಅನುಕೂಲಗಳಾಗಿಲ್ಲ ಎಂದಲ್ಲ. ಆಕೆಯನ್ನು ದಿಟ್ಟೆಯನ್ನಾಗಿ ಬೆಳೆಸಲು ಮಾಧ್ಯಮ ಅನೇಕ ದಾರಿಗಳನ್ನು ಮಾಡಿಕೊಟ್ಟಿದೆ. ಭಾರತದಲ್ಲಿ ಗಂಭೀರ ಪತ್ರಿಕೋದ್ಯಮ ಮಹಿಳೆಯ ಸ್ಥಾನಮಾನಗಳನ್ನು ಕುಗ್ಗಿಸಿಲ್ಲ. ಪತ್ರಕರ್ತೆಯಾಗಿ, ನಟಿಯಾಗಿ, ನಿರೂಪಕಿಯಾಗಿ, ಕಾರ್ಯಕ್ರಮ ನಿರ್ವಾಹಕಿಯಾಗಿ, ವಾರ್ತಾ ವಾಚಕಿಯಾಗಿ, ನಿರ್ದೇಶಕಿಯಾಗಿ, ನಿರ್ಮಾಪಕಿಯಾಗಿ ಮಾಧ್ಯಮ ಸಂಸ್ಥೆಗಳಲ್ಲಿ ಮಹಿಳೆ ತನ್ನನ್ನು ತಾನು ಗುರುತಿಸಿಕೊಂಡಿದ್ದಾಳೆ. ಆದರೆ ಎಷ್ಟೆ ಸಾಧನೆಯನ್ನು ಆಕೆ ಮಾಡುತ್ತಿದ್ದರೂ ಶೋಷಣೆಯ ಮುಖಗಳು ಮಾತ್ರ ಮುಚ್ಚಿಲ್ಲ. ಹೆಣ್ಣನ್ನು ಅಧಿಕಾರಯುತವಾದ ಸ್ಥಾನಗಳಿಗೆ ನೇಮಿಸುವುದರಿಂದ ಹಿಡಿದು ಆಕೆಯನ್ನು ಬಿಂಬಿಸುತ್ತಿರುವ ರೀತಿ, ಆಕೆಯ ಉಡುಗೆ – ತೊಡುಗೆಗಳು ಎಲ್ಲಾ ವಿಚಾರಗಳಲ್ಲೂ ಶೋಷಣೆ ನಡೆಯುತ್ತಿದೆ. ಒಂದು ಕಡೆ ಮಾಧ್ಯಮಗಳ ಮೂಲಕ ಹೆಣ್ಣು ಹೆಚ್ಚು ಬೆಳವಣಿಗೆಯನ್ನು ಕಾಣುತ್ತಿದ್ದರೆ ಮತ್ತೊಂದು ಕಡೆ ಹೆಣ್ಣಿನ ಮೇಲೆ ಶೋಷಣೆಗಳು ನಡೆಯುತ್ತಿವೆ. ಈ ಎಲ್ಲಾ ಅಂಶಗಳ ಕುರಿತು ಪ್ರಸ್ತುತ ಲೇಖನದಲ್ಲಿ ಚರ್ಚಿಸಲಾಗಿದೆ.*

***Keywords:*** *ದೃಶ್ಯ ಮಾಧ್ಯಮ, ದೂರದರ್ಶನ, ಮಹಿಳಾ ಸಬಲೀಕರಣ, ಮಹಿಳೆಯರ ಸ್ಥಾನಮಾನಗಳು.*

**ಪೀಠಿಕೆ**

ಭಾರತ ಸ್ವಾತಂತ್ರ್ಯೋತ್ತರದ ದಿನಗಳಲ್ಲಿ ಮಾಧ್ಯಮಗಳು ಸಹ ಹೊಸ ಬದಲಾವಣೆಗೆ ತೆರೆದುಕೊಂಡವು. ಮಾಧ್ಯಮದ ವಿವಿಧ ರಂಗಗಳಲ್ಲಿ ಮಹಿಳೆ ಹೆಜ್ಜೆ ಇಡಲು ಪ್ರಾರಂಭಿಸಿದಳು. ಆದರೆ ಮಹಿಳೆಗೆ ಮಾಧ್ಯಮ ಪ್ರವೇಶ ಸುಲಭದ್ದಾಗಿರಲಿಲ್ಲ. ಸಿನೆಮಾ ಅತ್ಯಂತ ಪ್ರಭಾವಶಾಲಿ ಮಾಧ್ಯಮ. ಆರಂಭದ ದಿನಗಳಲ್ಲಿ ಹೆಣ್ಣು ಸಿನೆಮಾಗಳಲ್ಲಿ ನಟಿಸುವುದನ್ನು ಸಮಾಜ ತೆರೆದ ಮನಸ್ಸಿನಿಂದ

***Please cite this article as:*** ಮೀನಾಕುಮಾರಿ. ಎಂ. (2024). ದೂರದರ್ಶನ ಮಾಧ್ಯಮದಲ್ಲಿ ಮಹಿಳೆಯರ ಸ್ಥಾನಮಾನ. *ಸೃಜನಿ: ಇಂಡಿಯನ್ ಜರ್ನಲ್ ಆಫ್ ಇನ್ನೋವೇಟಿವ್ ರಿಸರ್ಚ್ ಅಂಡ್ ಡೆವಲಪ್‌ಮೆಂಟ್*, 3(1), 38–42.

ಒಪ್ಪಿಕೊಳ್ಳಲಿಲ್ಲ. ಅವಳ ಬಗ್ಗೆ ಟೀಕೆಗಳು ವ್ಯಕ್ತವಾದವು. ಸ್ವತಃ ಮನೆಯಲ್ಲಿಯೇ ಅವಳು ವಿರೋಧವನ್ನು ಎದುರಿಸಿ ಮನೆಯಿಂದಲೇ ಹೊರಗೆ ಉಳಿಯಬೇಕಾದ ಪರಿಸ್ಥಿತಿ ಎದುರಾಗಿತ್ತು. ಆಕೆಯ ನೈತಿಕತೆಯ ಮೇಲೆ ಕಪ್ಪು ಮಸಿ ಬಳಿಯುವ ಪ್ರಯತ್ನಗಳು ನಡೆದವು.

ನಂತರದ ದಶಕಗಳಲ್ಲಿ ಮಾಧ್ಯಮ ಲೋಕದಲ್ಲಿ ಮಹಿಳೆಯರು ಸಾಕಷ್ಟು ಹೆಜ್ಜೆಗಳನ್ನೇ ಇರಿಸಿದ್ದಾರೆ. ಪತ್ರಿಕಾ ಮಾಲೀಕರು, ಸಂಪಾದಕರು ಹಾಗೂ ಟಿ.ವಿ ಮಾಧ್ಯಮದಲ್ಲಿ ಆಂಕರ್‌ಗಳಾಗಿ ಮಹಿಳೆಯರ ಉಪಸ್ಥಿತಿ ಎದ್ದು ಕಾಣುತ್ತಿದೆ. ಈ ಸಕಾರಾತ್ಮಕ ಬದಲಾವಣೆಯಲ್ಲಿ ಮಾಧ್ಯಮದ ಕೊಡುಗೆಯನ್ನು ಮರೆಯುವಂತಿಲ್ಲ. ಟಿ.ವಿ ಮಾಧ್ಯಮ ಎಂದಾಕ್ಷಣ ಯಾವುದೋ ಒಂದು ವಾಹಿನಿಗೆ ಸೀಮಿತವಾಗಲು ಸಾಧ್ಯವಿಲ್ಲ. ಪ್ರತಿಯೊಂದು ಪ್ರಕಾರಗಳಲ್ಲಿಯೂ ಔದ್ಯೋಗಿಕ ಸ್ಥಾನಮಾನಗಳಲ್ಲಿ ಭಿನ್ನತೆಯಿದೆ. ಟಿ.ವಿ ಎಂದಾಕ್ಷಣ ಮಹಿಳೆ ಪತ್ರಕರ್ತೆಯಾಗಿ, ನಿರೂಪಕಿಯಾಗಿ, ನಟಿಯಾಗಿ, ನಿರ್ದೇಶಕಿಯಾಗಿ ಮತ್ತಿತರ ಪಾತ್ರಗಳನ್ನು ನಿರ್ವಹಿಸುತ್ತಾಳೆ. ಈ ಪಾತ್ರಗಳಿಗೆ ತಕ್ಕಂತೆ ಅವಳ ವ್ಯಕ್ತಿತ್ವದ ಸ್ವರೂಪ ನಿರ್ಧರಿಸಲ್ಪಡುತ್ತದೆ. ಒಂದೊಂದು ಪಾತ್ರವೂ ಬೇರೆಯದೇ ಆದ ಅರ್ಹತೆಗಳನ್ನು ಬಯಸುತ್ತದೆ. ನಟಿಯಾಗಲು ಅವಳ ಸೌಂದರ್ಯ, ನಟನೆ, ಮಾತುಗಾರಿಗೆ ಪ್ರಮುಖ ಮಾನದಂಡವಾದರೆ ಪತ್ರಕರ್ತೆಯಾಗಲು ಅವಳ ಧೈರ್ಯ, ಮಾತುಗಾರಿಕೆ, ಭಾಷೆ ಜೊತೆಗೆ ಆಕೆಯ ಭಿನ್ನವಾದ ಆಲೋಚನಾ ಮನೋಭಾವ ಮುಖ್ಯವಾಗುತ್ತದೆ. ಈ ಎಲ್ಲಾ ದೃಷ್ಟಿಯಲ್ಲಿ ಮಹಿಳೆ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸುವಲ್ಲಿ ಎಲ್ಲೂ ಹಿಂದೆ ಉಳಿದಿಲ್ಲ. ತನಗೆ ಸಿಕ್ಕ ಅವಕಾಶಗಳನ್ನು ಬಳಸಿಕೊಂಡು ಉನ್ನತ ಮಟ್ಟಕ್ಕೇರಿರುವ ಅನೇಕ ಮಹಿಳೆಯನ್ನು ನಾವು ಗುರುತಿಸಬಹುದು. ಹೀಗೆ ಮಹಿಳೆಯ ಬೆಳವಣಿಗೆಯಲ್ಲಿ ಮಾಧ್ಯಮ ಸಾಕಷ್ಟು ಅವಕಾಶಗಳನ್ನು ಒದಗಿಸಿದೆ. ಆಕೆಯ ವ್ಯಕ್ತಿತ್ವದಲ್ಲಿ ವೈವಿಧ್ಯತೆ ತಂದುಕೊಳ್ಳುವಲ್ಲಿ ಸಹಕಾರಿಯಾಗಿ ನಿಂತಿರುವುದರಲ್ಲಿ ಎರಡು ಮಾತಿಲ್ಲ.

ಇಷ್ಟೆಲ್ಲಾ ಬೆಳವಣಿಗೆಗಳ ನಂತರವೂ ಮಹಿಳೆಗೆ ಮಾಧ್ಯಮದಲ್ಲಿ ದೊರೆಯುತ್ತಿರುವ ಸ್ಥಾನಮಾನಗಳ ಬಗ್ಗೆ ಅಸಮಾಧಾನಗಳಿವೆ. ಭಾರತದಲ್ಲಿ ಒಟ್ಟು 672 ಜಿಲ್ಲೆಗಳಿವೆ. ಆದರೆ ಆ ಜಿಲ್ಲೆಗಳಲ್ಲಿರುವ ಮಹಿಳಾ ವರದಿಗಾರರ ಪ್ರಮಾಣ ಅತ್ಯಲ್ಪ. ಸಮೀಕ್ಷೆಯೊಂದರ ಪ್ರಕಾರ ಜಿಲ್ಲಾ ಮಟ್ಟದ ಪತ್ರಕರ್ತೆಯರ ಪ್ರಮಾಣ ಕೇವಲ ಶೇ.2.7 ಜೊತೆಗೆ ಮಧ್ಯದಲ್ಲೇ ಉದ್ಯೋಗವನ್ನು ಬಿಡುವ ಪತ್ರಕರ್ತೆಯರ ಸಂಖ್ಯೆಯೂ ಹೆಚ್ಚಾಗಿದೆ. ನಗರಗಳಲ್ಲಿ ಪತ್ರಕರ್ತೆಯರ ಸಂಖ್ಯೆ ಹೆಚ್ಚಾಗಿದ್ದರೂ ನಾನಾ ಕಾರಣಗಳಿಗೆ ತಮ್ಮ ವೃತ್ತಿಯಿಂದ ಹೊರಬರುವವರ ಸಂಖ್ಯೆ ಹೆಚ್ಚಾಗಿದೆ. ಜೊತೆಗೆ ಮಹಿಳಾ ಪತ್ರಕರ್ತರನ್ನು ಕೇವಲ ಕೆಲವು ಸೀಮಿತ ವಿಷಯಗಳ ವರದಿಗೆ ಮಾತ್ರ ನೇಮಿಸುತ್ತಿರುವುದೂ ವಿಪರ್ಯಾಸ. ಸಿನಿಮಾ, ಸಣ್ಣಪುಟ್ಟ ಕಾರ್ಯಕ್ರಮಗಳ ವರದಿ ಹೀಗೆ ಅವರು ಸೀಮಿತಗೊಳ್ಳುತ್ತಿದ್ದಾರೆ. ಇದನ್ನು ಮೀರಿನಿಂತ ಪತ್ರಕರ್ತೆಯರು ಇದ್ದರೂ ಸಹ ಅವರ ಸಂಖ್ಯೆ ಬೆರಳೆಣಿಕೆಯಷ್ಟು. ನ್ಯೂಸ್ ಚಾನಲ್ಗಳಲ್ಲಿ ಪ್ರಸಾರವಾಗುವ ಗಂಭೀರ ವಿಚಾರಗಳ ಚರ್ಚೆಗಾಗಲಿ, ಹಿರಿಯ ವ್ಯಕ್ತಿಗಳ ಸಂದರ್ಶನಕ್ಕಾಗಲಿ, ಇನ್ನಿತರ ಗಟ್ಟಿತನದ ವಿಚಾರಗಳಲ್ಲಿ ಮಹಿಳೆಯರು ಮೂಲೆಗುಂಪಾಗಿದ್ದಾರೆ. ಇವೆಲ್ಲವೂ ಅಸ್ತಿತ್ವದ ಚರ್ಚೆಗೇ ಸೇರುತ್ತವೆ. ಯಾರೋ ನಿರ್ದೇಶಿಸಿದಂತೆ ಕೇವಲ ಗೊಂಬೆಯಂತೆ ವರದಿ ಒಪ್ಪಿಸುವ ಕೀಲುಗೊಂಬೆಯಾಗಿ ಮಾತ್ರ ಅವಳಿದ್ದಾಳೆ. ಒಬ್ಬ ನ್ಯೂಸ್ ರೀಡರ್ ಆಗಿ ಯಾರೋ ಬರೆದುಕೊಟ್ಟ ನ್ಯೂಸ್ ಓದುವ ಆದರೆ ಅದರ ಒಳಾರ್ಥವನ್ನು ಅರಿಯದ ಪರಿಸ್ಥಿತಿಯಲ್ಲಿ ಕೆಲವು ಮಹಿಳಾ ನ್ಯೂಸ್ ರೀಡರ್ಗಳಿದ್ದಾರೆ. ಇವೆಲ್ಲಾ ಹೆಣ್ಣು ತನ್ನ ಅಸ್ತಿತ್ವವನ್ನು ಮಾಧ್ಯಮಗಳಲ್ಲಿ ಹೇಗೆ ಉಳಿಸಿಕೊಳ್ಳುತ್ತಿದ್ದಾಳೇ ಎಂಬ ಪ್ರಶ್ನೆಯನ್ನೇ ಎತ್ತುತ್ತವೆ.

ಇಂದು ಭಾರತದಲ್ಲಿ ಮಹಿಳೆಯರು ಎಲ್ಲಾ ಕ್ಷೇತ್ರಗಳಲ್ಲಿ ಪುರುಷರ ಸಮಾನವಾಗಿ ಮುನ್ನಡೆದಿದ್ದಾರೆ. ಮಹಿಳೆಯರು ಸಬಲರಾಗದ ಹೊರತು ದೇಶದ ಸಮಗ್ರ ಅಭಿವೃದ್ಧಿ ಸಾಧ್ಯವಿಲ್ಲ. ಯುನೆಸ್ಕೊ ಪ್ರಕಾರ ಮಾಧ್ಯಮಗಳು ಪ್ರಧಾನವಾಗಿ ಪುರುಷ ದೃಷ್ಟಿಕೋನವನ್ನು ಒಳಗೊಂಡಿವೆಯೇ ಹೊರತು ಮಹಿಳೆಯರ ಶಿಕ್ಷಣ ಮತ್ತು ಅಭಿವೃದ್ಧಿಗೆ ಹೆಚ್ಚಿನ ಮಹತ್ವ ನೀಡಿಲ್ಲವೆಂದು 1980 ರ ದಶಕದಲ್ಲಿ ವರದಿ ಮಾಡಿದೆ. "ಮಾಧ್ಯಮಗಳಲ್ಲಿ ವರದಿಯಾಗುವ ಮಹಿಳೆಯರ ವಿದ್ಯಮಾನಗಳು ಪುರುಷರ ದೃಷ್ಟಿಕೋನವನ್ನು ಪ್ರಧಾನವಾಗಿ ಪ್ರತಿನಿಧಿಸುತ್ತವೆ. ಮಾಧ್ಯಮಗಳ ಜಾಹೀರಾತುಗಳು ಮಹಿಳೆಯರನ್ನು ಗೃಹಿಣಿಯರನ್ನಾಗಿ, ಗ್ರಾಹಕರನ್ನಾಗಿ ಮತ್ತು ಲೈಂಗಿಕ ವಸ್ತುಗಳನ್ನಾಗಿ ಪ್ರತಿಬಿಂಬಿಸಿವೆ. ಮಹಿಳೆಯರನ್ನು ಭೋಗಸಂಸ್ಕೃತಿಯ ವಕ್ತಾರರನ್ನಾಗಿ ಮಾಧ್ಯಮಗಳು ಬಿಂಬಿಸಿವೆಯೇ ಹೊರತಾಗಿ ಬುದ್ಧಿವಂತರು ಮತ್ತು ಸಾಧಕರೆಂದು ಬಿಂಬಿಸಿಲ್ಲ". ಭಾರತದಲ್ಲಿ ಮಹಿಳೆಯರ ಸಮಾನತೆಗೆ ಮತ್ತು ಸಬಲೀಕರಣಕ್ಕೆ ಭಾರತೀಯ ಮಾಧ್ಯಮಗಳ ಕೊಡುಗೆ ನಗಣ್ಯವೆಂದೇ ಹೇಳಬಹುದು.

ಇಂದಿಗೂ ಮಾಧ್ಯಮಗಳು ಪುರುಷಪ್ರಧಾನ ಮಾಧ್ಯಮಗಳಾಗಿವೆ. ಉನ್ನತ ಸ್ಥಾನಮಾನಗಳು, ನಿರ್ಧಾರ ತೆಗೆದುಕೊಳ್ಳುವ ಆಯಕಟ್ಟಿನ ಜಾಗಗಳಲ್ಲಿ ಮಹಿಳೆಯರು ಇಂದಿಗೂ ಹೆಚ್ಚಾಗಿ ಕಾಣುತ್ತಿಲ್ಲ. ಮಹಿಳೆಯ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಶಾಸನಾತ್ಮಕ ಸ್ಥಾನಮಾನಗಳ ಅಧ್ಯಯನ ಹಾಗೂ ಪರಾಮರ್ಶೆಗಾಗಿ ಮಹಿಳೆಯರ ಸ್ಥಾನಮಾನದ ಕುರಿತ ಉನ್ನತ ಮಟ್ಟದ ಸಮಿತಿಯನ್ನು ಭಾರತ ಸರ್ಕಾರ 2012 ರಲ್ಲಿ ರಚಿಸಿದೆ. 1971 ರಲ್ಲಿ ಇಂತಹದೇ ಒಂದು ಸಮಿತಿಯನ್ನು ಸರ್ಕಾರ ರಚಿಸಿತ್ತು. ಆ ಸಮಿತಿಯಲ್ಲಿ ವೀಣಾ ಮಜುಂದಾರ್ ರಂತಹ ಸಾಮಾಜಿಕ ಕಾರ್ಯಕರ್ತೆ ಹಾಗೂ ಲೊತಿಕಾ ಸರ್ಕಾರ್ ರಂತಹ ವಕೀಲರಿದ್ದರು. 1974ರಲ್ಲಿ ಆ ಸಮಿತಿ ನೀಡಿದ ವರದಿಯಲ್ಲಿ ಮಹಿಳೆಯರ ಸ್ಥಾನಮಾನದ ಮೇಲೆ ಸಮೂಹ ಮಾಧ್ಯಮಗಳ ಪಾತ್ರ ಮತ್ತು ಪ್ರಭಾವವನ್ನು ಕುರಿತಂತೆ ವಿಶ್ಲೇಷಣೆ ಇದೆ. ಇದರ ಪ್ರಕಾರ ಒಟ್ಟಾರೆಯಾಗಿ ಹೇಳುವುದಾದರೆ 'ಭಾರತದಲ್ಲಿ ಗಂಭೀರ ಪತ್ರಿಕೋದ್ಯಮ ಮಹಿಳೆಯ ಸ್ಥಾನಮಾನವನ್ನು ಕುಗ್ಗಿಸಿಲ್ಲ.' ಎಂದು ಹೇಳುತ್ತದೆ. ಆದರೆ ಈ ವರದಿ ಬಂದ ನಾಲ್ಕು ದಶಕಗಳ ನಂತರವೂ ಈ ಚರ್ಚೆ ನಡೆಯುತ್ತಲೇ ಇರುವುದು ವಿಪರ್ಯಾಸವಾಗಿದೆ.

ಭಾರತದಲ್ಲಿ 60ರ ದಶಕದಲ್ಲಿ ಮಹಿಳೆಯರು ಪತ್ರಿಕಾ ರಂಗವನ್ನು ಪ್ರವೇಶಿಸುವುದು ಅಷ್ಟೇನು ಸುಲಭವಾಗಿರಲಿಲ್ಲ. ಕೇವಲ ಬೆರಳೆಣಿಕೆಯ ಮಹಿಳೆಯರು ಮುನ್ನಲೆಗೆ ಬಂದಿದ್ದು, 1965 ರ ಭಾರತ? ಪಾಕಿಸ್ತಾನ ಯುದ್ಧದ ವರದಿಗಾರಿಕೆ ಮಾಡಿದ ಪ್ರಭಾ ದತ್ ಹೊಸ ಮೇಲ್ಪಂಕ್ತಿಯನ್ನು ಹಾಕಿದರು. ಈ ವರದಿಗಾರಿಕೆಗೆ ಪ್ರಭಾ ದತ್ ಅವರು ಕೆಲಸ ಮಾಡುತ್ತಿದ್ದ 'ಹಿಂದೂಸ್ಥಾನ್ ಟೈಮ್ಸ್' ಪತ್ರಿಕೆ ಅನುಮತಿ ನೀಡಿರಲಿಲ್ಲ. ಆದರೆ ಪಟ್ಟು ಬಿಡದ ಪ್ರಭಾ ದತ್ ಇದರ ವರದಿಯನ್ನು ಮಾಡಿ ಕಚೇರಿಗೆ ಕಳಿಸಿದ್ದರು. ಉತ್ತಮ ಗುಣಮಟ್ಟದ ಅವರ ವರದಿಯನ್ನು ಕೈಬಿಡಲಾಗದ ಪತ್ರಿಕೆ ಅವರ ವರದಿಯ ಜೊತೆಗೆ ಮಿಲಿಟರಿ ಟ್ಯಾಂಕ್ ಮುಂದೆ ನಿಂತ ಪ್ರಭಾ ದತ್‌ರವರ ಚಿತ್ರವನ್ನೂ ಪ್ರಕಟಿಸಿತ್ತು. ಈ ಉದಾಹರಣೆ ಮಹಿಳೆಯ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿದೆ. ಆದರೆ ಈಗಲೂ ಇಂತಹದ್ದೊಂದು ಅವಕಾಶ ಮಹಿಳೆಯರನ್ನು ಅರಸಿ ಬರದೇ ಇರುವುದೇ ವಿಪರ್ಯಾಸದ ಸಂಗತಿ. ಎಲ್ಲಾ ಒತ್ತಡಗಳ ನಡುವೆಯೂ ಮಾಧ್ಯಮ ಲೋಕದಲ್ಲಿ ಮಹಿಳೆಯರು ಸಾಕಷ್ಟು ದೊಡ್ಡ ಹೆಜ್ಜೆಗಳನ್ನೇ ಇಟ್ಟಿದ್ದು, ಪತ್ರಿಕಾ ಮಾಲೀಕರಾಗಿ, ಸಂಪಾದಕರಾಗಿ, ಟಿ.ವಿ ಮಾಧ್ಯಮಗಳ ಮುಖ್ಯಸ್ಥರಾಗಿ, ಉತ್ತಮ ವರದಿಗಾರ್ತಿಯರಾಗಿ ತಮ್ಮ ಸಾಧನೆಯನ್ನು ಮೆರೆದಿದ್ದಾರೆ. ಇಷ್ಟೆಲ್ಲಾ ಸಾಧನೆಗಳ ನಂತರವೂ

ದೂರದ ಊರಿಗೆ ವರದಿಗಾಗಿ ತೆರಳಲು ಹಿಂಜರಿಯುವ, ಕುಟುಂಬದ ಒಪ್ಪಿಗೆಗಾಗಿ ಕಾಯುವ ಒಂದು ಮಹಿಳಾ ವರ್ಗವನ್ನೂ ನಾವು ಕಾಣುತ್ತೇವೆ. ಇಂತಹ ವೈರುಧ್ಯಗಳ ನಡುವೆ ಮಾಧ್ಯಮದಲ್ಲಿ ಮಹಿಳೆಯರ ಸ್ಥಾನಮಾನದ ಬಗ್ಗೆ ಚರ್ಚೆ ನಡೆಸುವುದು ಕಷ್ಟದ ಸಂಗತಿಯೇ.

ಇಂದಿನ ಪತ್ರಿಕೋದ್ಯಮದಲ್ಲಿ ಮಹಿಳೆಯರಿಗೆ ಹಲವು ಸಮಸ್ಯೆಗಳ ಜತೆಗೆ ತಂತ್ರಜ್ಞಾನದ ಸವಾಲುಗಳು ಎದುರಾಗಿದ್ದು ಅವುಗಳನ್ನು ಧೃತಿಗೆಡದೆ ಮಹಿಳೆಯರು ಸ್ವೀಕರಿಸಬೇಕು ಎಂದು ಹಿರಿಯ ಪತ್ರಕರ್ತೆ ಡಾ. ವಿಜಯಾ ರವರು ವಿಚಾರ ಸಂಕಿರಣವೊಂದರಲ್ಲಿ ಸಲಹೆ ನೀಡಿದ್ದಾರೆ.

ಹಿಂದೆಂದೂ ಕಾಣದ ಮಟ್ಟಿಗೆ ಸುದ್ದಿವಾಹಿನಿಗಳ ಹೆಚ್ಚಳವನ್ನು ಇಂದು ನಾವು ಕಾಣುತ್ತಿದ್ದೇವೆ. ಹಾಗೆಯೇ ಸುದ್ದಿ ಮನೆಗಳಲ್ಲಿ ಮಹಿಳೆಯರ ಉಪಸ್ಥಿತಿ ಎದ್ದು ಕಾಣುತ್ತಿದೆ. ಕೆಲವರಾದರೂ ಮಹಿಳೆಯರು ಇಂದು ಸಂಪಾದಕಿಯರಾಗಿದ್ದಾರೆ, ಅಂಕಣಕಾರರಾಗಿದ್ದಾರೆ, ಹಲವು ಟಿವಿ ಸುದ್ದಿ ವಾಹಿನಿಗಳ ಮುಖವಾಣಿಗಳಾಗಿದ್ದಾರೆ. ಆದರೆ ಈ ಪರಿವರ್ತನೆ ಪೂರ್ಣವಾದದ್ದೇ ಅಥವಾ ಇನ್ನೂ ಪರಿವರ್ತನೆಯ ಅಗತ್ಯವಿದೆಯೇ, ಅಸಮತೋಲನಗಳು ಉಳಿದುಕೊಂಡಿವೆಯೇ? ಎಂಬುದು ಇಂದು ಎದುರಾಗುವ ಪ್ರಶ್ನೆ. ಇತಿಹಾಸದತ್ತ ಒಮ್ಮೆ ಕಣ್ಣುಹಾಯಿಸಿದರೆ, ಸ್ವಾತಂತ್ರ್ಯಾ ನಂತರದ ಕಾಲದಲ್ಲಿ ದಿನಪತ್ರಿಕೆಗಳ ನ್ಯೂಸ್ ರೂಂಗಳಲ್ಲಿ ಮಹಿಳೆಯರ ಉಪಸ್ಥಿತಿ ತೀರಾವಿರಳ. 1947ರಲ್ಲಿ ದೆಹಲಿಯ 'ಟೈಮ್ಸ್ ಆಫ್ ಇಂಡಿಯಾ' ಪತ್ರಿಕೆಯಲ್ಲಿ ಕಮಲಾ ಮಂಕೇಕರ್ ರವರು ಪತ್ರಕರ್ತೆಯಾಗಿ ಕೆಲಸ ಮಾಡುತ್ತಿದ್ದರು. ಅವರು ಕೆಲಸ ಮಾಡುವ ಸಂದರ್ಭದಲ್ಲಿ ಮಹಿಳೆಯರಿಗೆ ಪ್ರತ್ಯೇಕ ಶೌಚಾಲಯ ವ್ಯವಸ್ಥೆಯೇ ಇರಲಿಲ್ಲ. ಈಗಲೂ ಕೂಡ ಜಿಲ್ಲಾ ಮಟ್ಟದಲ್ಲಿ ಕಾರ್ಯ ನಿರ್ವಹಿಸುವ ಪತ್ರಕರ್ತೆಯರಿಗೆ ಇಂತಹ ಸಮಸ್ಯೆಗಳು ಎದುರಾಗುತ್ತಿವೆ. ಹಾಗಾಗಿಯೇ ಇಂದಿಗೂ ನಗರ ಪ್ರದೇಶಗಳಲ್ಲಿ ಕಂಡು ಬರುವ ಪತ್ರಕರ್ತೆಯರ ಪ್ರಮಾಣಕ್ಕೂ ಜಿಲ್ಲಾ ಮತ್ತು ತಾಲೂಕು ಮಟ್ಟದಲ್ಲಿ ಕಾರ್ಯ ನಿರ್ವಹಿಸುವ ಪತ್ರಕರ್ತೆಯರ ಪ್ರಮಾಣದಕ್ಕೂ ಅಜಗಜಾಂತರ ವ್ಯತ್ಯಾಸಗಳಿವೆ. ಒಂದು ರೀತಿ ಹೇಳುವುದಾದರೆ ಕೆಲವು ಜಿಲ್ಲಾ ಮತ್ತು ತಾಲೂಕು ಕೇಂದ್ರಗಳಲ್ಲಿ ಮಹಿಳಾ ಪತ್ರಕರ್ತೆಯರೇ ಇಲ್ಲವೆಂದೂ ಹೇಳಬಹುದು.

ಕನ್ನಡ ಪತ್ರಿಕಾ ಕ್ಷೇತ್ರವನ್ನು ತೆಗೆದುಕೊಂಡರೆ ಕನ್ನಡ ವೃತ್ತ ಪತ್ರಿಕಾ ಲೋಕಕ್ಕೆ ಮಹಿಳೆಯರು ಪ್ರವೇಶ ಪಡೆದದ್ದು 70ರ ದಶಕದಲ್ಲಿ. 'ದಕ್ಷಿಣ ಭಾರತದಲ್ಲಿ ಪತ್ರಕರ್ತರ ಸಮಸ್ಯೆಗಳು ಹಾಗೂ ಭವಿಷ್ಯ' ಕುರಿತಂತೆ 1980 ರಲ್ಲಿ ಎರಡನೇ ಪತ್ರಿಕಾ ಆಯೋಗವು ವರದಿಯೊಂದನ್ನು ಸಿದ್ದಪಡಿಸಿತ್ತು. ಈ ಅಪ್ರಕಟಿತ ವರದಿಯನ್ನು ಹಿರಿಯ ಪತ್ರಕರ್ತೆ ಆರ್. ಅಖಿಲೇಶ್ವರಿ ಅವರು ತಮ್ಮ 'ವಿಮೆನ್ ಜರ್ನಲಿಸ್ಟ್ ಇನ್ ಇಂಡಿಯಾ. ಸ್ವಿಮ್ಮಿಂಗ್ ಎಗೇನ್ಸ್ಟ್ ದಿ ಟೈಡ್' ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ. ಈ ವರದಿ ಆ ಕಾಲದ ಇಂಗ್ಲಿಷ್ ಹಾಗೂ ಪ್ರಾದೇಶಿಕ ಭಾಷೆಗಳ ಪತ್ರಕರ್ತೆಯರ ಸ್ಥಿತಿಗತಿಯ ವಿವರಗಳನ್ನು ನೀಡುತ್ತದೆ. ಆಂಧ್ರಪ್ರದೇಶ, ಕರ್ನಾಟದ, ತಮಿಳುನಾಡು ಮತ್ತು ಕೇರಳಗಳಲ್ಲಿ ನಡೆಸಲಾದ ಈ ಅಧ್ಯಯನದ ಪ್ರಕಾರ ಸಂಪ್ರದಾಯಶೀಲ ದಕ್ಷಿಣ ಭಾರತದಲ್ಲಿ ನಗರ ಪ್ರದೇಶಗಳಲ್ಲಷ್ಟೇ ಕೆಲವು ಪತ್ರಕರ್ತೆಯರನ್ನು ಕಾಣಬಹುದಿತ್ತು. ಅವರನ್ನು ಪುರುಷರಿಗೆ ಸಮಾನವಾಗಿ ಪರಿಗಣಿಸುದು ಅತ್ಯಂತ ದೂರದ ಸಂಗತಿಯಾಗಿತ್ತು. ಮಹಿಳೆಗೆ ವರದಿಗಾರಿಕೆಗೆ ಅವಕಾಶ ನೀಡಿದರೂ ಅದು ಮಹಿಳೆ, ಮಕ್ಕಳು, ಸಾಂಸ್ಕೃತಿಕ ಸಮಾರಂಭಗಳಿಗೆ ಮಾತ್ರ ಸೀಮಿತವಾಗಿದ್ದು ಅಪರಾದ, ರಾಜಕೀಯ ವಿಚಾರಗಳ ಕುರಿತಾದ ವರದಿಗಾರಿಕೆಗೆ ಅವಕಾಶಗಳು ಮಹಿಳೆಯರಿಗೆ ಸಿಗುತ್ತಿರಲಿಲ್ಲ. ತನಿಖಾ ವರದಿಗಾರಿಕೆಯನ್ನು ಮಹಿಳೆಯರೂ ಊಹಿಸುವ ಹಾಗೂ ಇರಲಿಲ್ಲ. ಈಗ ಈ ಪರಿಸ್ಥಿತಿ ಬದಲಾಗಿದೆಯೇ? ಎಂಬ ಪ್ರಶ್ನೆ

ಬರುವುದು ಸಹಜ. ಖಂಡಿತವಾಗಿಯೂ ಈಗಲೂ ಅಪರಾಧ, ತನಿಖಾ ವರದಿಗಳಲ್ಲಿ ಕೇವಲ ಬೆರಳೆಣಿಕೆಯ ವರದಿಗಾರ್ತಿಯರಷ್ಟೇ ಕಾಣುತ್ತೇವೆ.

ಮಹಿಳೆಯರಿಗೆ ಮಾಧ್ಯಮದಲ್ಲಿ ಕೆಲಸ ಮಾಡಲು ಸಮಾನ ಅವಕಾಶಗಳನ್ನು ನೀಡಬೇಕು ಎಂಬ ನೆಲೆಯಲ್ಲಿ ಮಹಿಳೆಯರು ರಾತ್ರಿಪಾಳಿಯಲ್ಲಿ ಕೆಲಸ ಮಾಡುವ ಸವಾಲು ಪ್ರಮುಖವಾದದ್ದು. ರಾತ್ರಿ ಪಾಳಿಯಲ್ಲಿ ಕೆಲಸ ಮುಗಿದ ನಂತರ ಮನೆಗೆ ಹೋಗಲು ಕಚೇರಿ ವ್ಯಾನ್ ಒದಗಿಸುವ ವಿಶೇಷ ರಿಯಾಯಿತಿ ಬಗ್ಗೆ ಪುರುಷ ಸಹೋದ್ಯೋಗಿಗಳು ಪ್ರತಿರೋಧ ತೋರಿದ್ದು ಮಹಿಳೆಯರು ಅನಿವಾರ್ಯವಾಗಿ ಬೆಳಗ್ಗೆ ಮತ್ತು ಮಧ್ಯಾಹ್ನದ ಪಾಳಿಯನ್ನೇ ಆಯ್ಕೆ ಮಾಡಿಕೊಳ್ಳಬೇಕಾಗಿತ್ತು.

ಮಾಧ್ಯಮದ ಗುಣ ಬದಲಾವಣೆ. ಆದರೆ ಮಹಿಳೆಯನ್ನು ಪ್ರತಿನಿಧಿಸುವಲ್ಲಿ ಸಂಕೀರ್ಣತೆಯನ್ನು ಗುರುತಿಸಬಹುದು. ಜಾಹೀರಾತುಗಳ ವಿಚಾರಕ್ಕೆ ಬಂದರೆ ಕಸಬರಿಕೆ ಜಾಹಿರಾತಿಗೂ ಮಹಿಳೆ ಬೇಕು, ಪುರುಷರ ಶೇವಿಂಗ್ ಕ್ರೀಮ್ ಜಾಹಿರಾತಿಗೂ, ಮನೆಯಲ್ಲಿ ಬಳಸುವ ವಸ್ತುಗಳಿಂದ ಹಿಡಿದು ದೊಡ್ಡ ದೊಡ್ಡ ಪ್ರಮಾಣದ ಜಾಹಿರಾತುಗಳಿಗೂ ಮಹಿಳೆ ಬೇಕು. ಹೀಗಿರುವಾಗ ಮಾಧ್ಯಮ ಮತ್ತು ಮಹಿಳೆ ಎಂದು ನೋಡುವಾಗ ಅನೇಕ ಪ್ರಶ್ನೆಗಳು ಬರುತ್ತವೆ. ಮಾಧ್ಯಮದಲ್ಲಿ ಮಹಿಳೆಗೆ ಯಾವ ರೀತಿಯ ಸ್ಥಾನಮಾನವನ್ನು ನೀಡಲಾಗಿದೆ ಎಂಬ ಪ್ರಶ್ನೆ ಇಲ್ಲಿ ಬಹುಮುಖ್ಯವಾದದ್ದು. ಮಾಧ್ಯಮಗಳು ಮಹಿಳೆಯರನ್ನು ಹೇಗೆ ಪ್ರತಿನಿಧೀಕರಿಸುತ್ತಿವೆ ಎಂಬುದು ಮತ್ತೊಂದು ಮುಖ್ಯ ಪ್ರಶ್ನೆಯಾಗುತ್ತದೆ.

**ಉಪಸಂಹಾರ**

ಮಾಧ್ಯಮ ಅತ್ಯಂತ ವೇಗವಾಗಿ ಜನರನ್ನು ತಲುಪುತ್ತದೆ. ಜನ ಅದನ್ನು ಬೇಗ ನಂಬುತ್ತಾರೆ. ಹಾಗೆಯೇ ಅದನ್ನು ಫಾಲೋ ಮಾಡುತ್ತಾರೆ. ಹೀಗಿರುವಾಗ ಮಾಧ್ಯಮ ಹೆಣ್ಣನ್ನು ಬಿಂಬಿಸುವ ರೀತಿಯಲ್ಲಿ ತಪ್ಪುಗಳು ನಡೆದರೆ ಮುಂದಿನ ಪೀಳಿಗೆಯು ಅದನ್ನೇ ಮುಂದುವರೆಸುವ ಸಾಧ್ಯತೆಗಳು ಹೆಚ್ಚಾಗಿವೆ. ಇಂದಿನ ಬೆಳವಣಿಗೆಗಳು ಕೆಲವು ಹಂತಗಳಲ್ಲಿ ಸರಿಯಾಗಿದ್ದರೂ ಮತ್ತೆ ಕೆಲವು ದಾರಿಗಳಲ್ಲಿ ಸಮಾಜವನ್ನು ತಪ್ಪುದಾರಿಗೆ ಎಳೆಯುವ ಹಂತದಲ್ಲಿವೆ. ಹೆಣ್ಣಿನ ವಿಚಾರವಾಗಿ ಇರುವ ಮಾಧ್ಯಮದ ಕೆಲವು ನಿಲುವುಗಳು ಬದಲಾಗಬೇಕಿದೆ. ಈ ನಿಟ್ಟಿನಲ್ಲಿ ಹೆಚ್ಚಿನ ಚರ್ಚೆಗಳು ನಡೆಯಬೇಕಿದ್ದು ಇದರಿಂದ ಸಮಾಜದಲ್ಲಿ ಹೆಣ್ಣಿನ ಸ್ಥಾನವನ್ನು, ವ್ಯಕ್ತಿತ್ವವನ್ನು ಪ್ರಬಲಗೊಳಿಸಬಹುದಾಗಿದೆ.

**ಪರಾಮರ್ಶನ ಗ್ರಂಥಗಳು:**


- ಗೀತಾ ಪ್ರಸಾದ್. (2009). *ಆಧುನಿಕ ಮಹಿಳಾ ಅಭಿವ್ಯಕ್ತಿ.* ಧಾತ್ರಿ ಪುಸ್ತಕ
- ಕಲಾವತಿ. ಜೆ.ಬಿ. (2010). *ಜಾಹಿರಾತುಗಳಲ್ಲಿ ಮಹಿಳಾ ಪ್ರತಿನಿಧೀಕರಣ.* ಪ್ರಗತಿ ಗ್ರಾಫಿಕ್ಸ್.
- ಮಂಜುಳಾ ಸಿ.ಪಿ. (2021, ಜನವರಿ 5). *ಮಾಧ್ಯಮಗಳಲ್ಲಿ ಮಹಿಳೆ:ಅಗೋಚರ ಅಡೆತಡೆ.* ಋತುಮಾನ.
- ನಾಗಮಣಿ ಎಸ್. ರಾವ್. (2012). *ಸ್ತ್ರೀ ಪಥ.* ನವ ಕರ್ನಾಟಕ ಪ್ರಕಾಶನ.
- ರಶ್ಮಿ ನಾಯಕ್. *ಮಹಿಳೆಯನ್ನು ಬಿಂಬಿಸುವಲ್ಲಿ ಮಾಧ್ಯಮದ ಪಾತ್ರ.* ನ್ಯೂಸ್ 13
- ಸರೋಜಾ ಕೆ. (2004). *ಮಹಿಳೆ ಮತ್ತು ಸಮೂಹ ಮಾಧ್ಯಮಗಳು.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.
- ಸಂಜ್ಯೋತಿ. ವಿ.ಕೆ. (2019, ಡಿಸೆಂಬರ್ 31). *ಸುದ್ದಿ, ಸಿನೆಮಾ ಮಾಧ್ಯಮಗಳಲ್ಲಿ ಹೆಣ್ಣು ಮತ್ತು ನೋಟ.* ವಾರ್ತಾಭಾರತಿ ದಿನಪತ್ರಿಕೆ.
- ಶ್ರೀಮತಿ ಎಚ್. ಎಸ್. (2009). *ಸ್ತ್ರೀವಾದಿ ಭಾಷಾಶಾಸ್ತ್ರ ಪ್ರವೇಶಿಕೆ.* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ.